# ಅರ್ಪಣೆ

ಮಾತೃಶ್ರೀ ಜಯದೇವಿತಾಯಿ:

ಅವರಿಗೆ

# ತಾಯಿಯ ಹರಕೆ . . .

ಚೈತ್ರಾಕ್ಷಿಯ ನೋಟ ಚಂದಿರನ ತೋಟ
ಚಿತ್ತರಿಸಿ ನಿಂದಾವ ಽ ಬಿಳಿಹೂವು
ಚಿತ್ತರಿಸಿ ನಿಂದಾವ ಬಿಳಿಹೂವು - ಚೈತ್ರಾಕ್ಷಿ
ಚಿತ್ತರದ ಗೊಂಬಿ ಽ ನಸಕಂಗ

*

ಚೈತ್ರಾಕ್ಷಿಯ ಕಂಗೇಳು ಬಿಳಿ ಮುತ್ತಿನ ಹಾರ
ಚಿತ್ತಿ ಮಳಿಯಾಗಿ ಽ ಸುರದದ
ಚಿತ್ತಿ ಮಳಿಯಾಗಿ ಸುರದದ - ತಿಳಿಧಾರಿ
ಚೈತರದ ಉರಿಬಿಸಿಲ ಽ ನುಂಗೇದ

ಡಿಸೆಂಬರ ೧೯೫೮
ಸೊಲ್ಲಾಪೂರ

ಜಯದೇವಿತಾಯಿ

# ಮುನ್ನುಡಿ . . .

—೧—

ಒಬ್ಬೊಬ್ಬ ಕವಿಗೆ ಒಂದೊಂದು ಕಾವ್ಯದೃಷ್ಟಿ, ಒಂದೊಂದು ಕಾವ್ಯಕಲ್ಪನೆ. “ಜೇಂಗೊಡದಂತೆ ಝೇಂಕರಿಪ ತುಂಬಿಗಳಿಂಚರದಂತೆ....ಹೊಸ ಸುಗ್ಗಿಯ ನಂದನದಂತೆ....ಸುವಿಲಾಸೆಯ ನಲ್ಲಳ ನೋಟದಂತೆ....” ಎಂದು ಒಬ್ಬ ಭಾವಿಸಿದರೆ, ಇನ್ನೊಬ್ಬ ಕವಿ “ಅಂಚೆಯ ತುಪ್ಪುಳಂಚೆಯಿಂ ತಿರುಪಿದವೊಲ್ ಹೃದಯವನೆ ಹೊಸ ಬಗೆ ರಸಭಾವದೊಳೋಕುಳಿಯಾಡೆ” ಎಂದು ಹಾಡಿ ನಲಿದಾಡಿದ್ದಾನೆ; “ತಪಸ್ಸಿಲ್ಲದ ಕಾವ್ಯ ಪ್ರೇಮವಿಲ್ಲದ ಕಾಮದಂತೆ” ಎಂದು ಆಧುನಿಕ ಕವಿಯೊಬ್ಬ ಕಾವ್ಯಕ್ಕೆ ತಪಸ್ಸಿನ ಹಿನ್ನೆಲೆಯನ್ನು ನಿರ್ಮಿಸಿದ್ದಾನೆ. ಅವರವರ ದೃಷ್ಟಿಗನುಗುಣವಾಗಿ, ಅವರವರ ಕಾವ್ಯಾನುಭವಕ್ಕನುಗುಣವಾಗಿ ಕವಿತಾ ಕಾಮಿನಿ ಅವರಿಗೆ ಕಾಣಿಸಿಕೊಳ್ಳುತ್ತಾಳೆ. ದೃಷ್ಟಿ ಯಾವುದೇ ಇದ್ದರೂ ಅದಕ್ಕೆ ಭಾವೋನ್ಮಾದದ ಕಾವು ಅತ್ಯವಶ್ಯ. ಆ ಕಾವಿನಲ್ಲಿ ಕರಗಿದಾಗಲೆ ಕಾವ್ಯಪ್ರತಿಭೆ ಒಡಮೂಡಿ ಬರುತ್ತದೆ. ಹೃದಯ ವೀಣೆಯ ಝೇಂಕಾರದಿಂದ ಹೊರಹೊಮ್ಮಿದ ನಾದದ ಕಾವಿನಲ್ಲಿ ಕಾವ್ಯದ ಸೃಷ್ಟಿಯಾಗುತ್ತದೆ. ಜೀವನದ ಬಗೆಬಗೆಯ ಅನುಭವದ ಮುತ್ತುಗಳನ್ನು ಪ್ರತಿಭೆಯ ಮಾಲೆಯಲ್ಲಿ ಪೋಣಿಸಿ ಕಾವ್ಯಾಂಗನೆಯನ್ನು ಶೃಂಗರಿಸಿದಾಗ ಆಕೆ ನಿಜವಾಗಿಯೂ ಚಲುವಿಕೆಯ ತವರೂರಾಗಿ ಕಂಗೊಳಿಸುತ್ತಾಳೆ.

ಈ ಬಗೆಯ ಅನುಭವ, ಈ ರೀತಿಯ ಪ್ರತಿಭೆ ಪಂಚಾಕ್ಷರಿಯವರ ಕವನಗಳಲ್ಲಿ ಹೆಜ್ಜೆಹೆಜ್ಜೆಗೂ ಎದ್ದು ಕಾಣುತ್ತದೆ. ರಸ ಭಾವ, ಕಲ್ಪನಾ ವೈಖರಿ ಹಾಗೂ ಉದಾತ್ತ ವಿಚಾರಗಳ

ತ್ರಿವೇಣೀ ಸಂಗಮದಲ್ಲಿ ಕಾವ್ಯಕನ್ನಿಕೆ ಮಿಂದು ಪ್ರಸೀತಳಾಗಿ ದ್ದಾಳೆ. ಈ ತ್ರಿವೇಣಿ ಸಂಗಮವೇ "ಕವಿಗೆ ವಾಣಿಯಾಗಿ ಕವಿತೆಯಾಗಿ, ಜೀವ ಜೀವದಲಿ ಬೆರೆತು" ಕವಿಯನ್ನು ಹಾಡ ತೊಡಗಿಸಿದೆ. ಭಾವೋದ್ರೇಕದಿಂದ ಹುಚ್ಚೆದ್ದ ಕವಿಯ ಕಲ್ಪನೆಯ ನವಿಲು ಕುಣಿಯತೊಡಗಿದಾಗ, ರಸಭಾರದಿಂದ, ಅರ್ಥಭಾರ ದಿಂದ, ಧ್ವನಿಭಾರದಿಂದ ಬಗ್ಗಿ ಬಳುಕುವ ಶಬ್ದಗಳು ಚಿಮ್ಮಿಬಂದು ಬಗೆ ಬಗೆಯ ಬಣ್ಣದ ಗರಿಗಳಾಗಿ ನವಿಲಿನ ಬೆಡಗನ್ನು ಇಮ್ಮಡಿ ಗೊಳಿಸುತ್ತವೆ.

ಮಧುಮಾಸ ಬಂದಿತ್ತು
ಹೂ ಅರಳಿ ನಿಂದಿತ್ತು
ಪರಾಗ ತುಂಬಿ ಸೂಸಿತ್ತು
ಭ್ರಮರ ಗುಂಯ್ ಗುಟ್ಟಿತ್ತು
.... .... .... .... .... ....
ಕವಿ ಕಂಡ ಈ ದೃಶ್ಯ ರಮ್ಯವಾಗಿತ್ತು!
ಕವಿ ತಿಳಿದ ಈ ರಹಸ್ಯ ಗೂಢವಾಗಿತ್ತು!!

(ಪ್ರಕೃತಿ ಪುರುಷ)

ಇದರಲ್ಲಿಯ ಕಾವ್ಯದ ಸಹಜ ಓಟ ಮೆಚ್ಚುವಂತಹದಾಗಿದೆ.

ರೆಪ್ಪೆಯೊಳಗಳಲಿ ಕನಸು ನನಸ ಪೊತ್ತು
ಕುರುಳುಗಳ ಹೊರಳಿನಲಿ ನೋಹದ ಬೊತ್ತು
ಮಾತನಾಡಿದರದೊ ಹೂಮಳೆ ಸುರಿದುದೋ

(ಕುಸುಮ ಜೀವಿ)

ಕಂಗಳೋ ಹಸಿದಿಹವು ಮನವು 'ರಣರಣಿಸೆನಿಸಿ'
ಎಂದು ನಿನ್ನಯ ಬರುವು ಎನ್ನ ಮುಗ್ಧೆ!
ಬದುಕಿನಲಿ ತುಂಬುವೆಯ ನಿನ್ನ ದರುಶನ ಸುಧೆಯ
ಚೆಲುವಿನಾಣೆಯನಿಟ್ಟು ಕರೆವೆ ಸ್ನಿಗ್ಧೆ!

(—ಗೆ)

ಇಲ್ಲಿಯ ಕಲ್ಪನಾವಿಲಾಸ ಕಾವ್ಯ ಸೌಂದರ್ಯಕ್ಕೆ ಪುಟ ಕೊಟ್ಟಂತಿದೆ.

ನಿಶೆಯ ಮಡಲಲಿ ಸೋತು ಬಿದ್ದಿದೆ ಬದುಕು
ದಿನಕರ್ಮ ಮುಗಿಸಿದ ಸಂತೋಷದಲಿ

ಕೊಲೆ! ಮಣ್ಣು ಮಣ್ಣನು ತುಳಿದಿದೆ
ಕೇಕೆ ಹಾಕಿ ಕುಣಿದಿದೆ ಮತ್ತೆ ತಣಿದಿದೆ!
ಬೆಳಕಿನೆದೆಯನೊತ್ತಿ ಕತ್ತಲು ಹೆಡೆಯನೆತ್ತಿ ನಿಂತಿದೆ
ಬಾಳ ಹಂದರದಲ್ಲಿ! (ಓಂ! .... .... ಶಾಂತಿ)

ಇಲ್ಲಿಯ ಧ್ವನಿ ನಿಜವಾಗಿಯೂ ಮಾನವ ಕಲ್ಯಾಣಕ್ಕಾಗಿ ಪರಿತಪಿಸುವ ಧ್ವನಿ! ಇದೆಲ್ಲ ಕೇವಲ ಕಲ್ಪನೆಯ ಕತೆಯಲ್ಲ; ಬಣ್ಣಬಣ್ಣದ ಊಹೆ ಅಲ್ಲ; ಇದಕ್ಕೆ ರಕ್ಷಾ ಕವಚವಾಗಿ ಉದಾತ್ತ ವಿಚಾರವೂ ಇದೆ; ಉದಾತ್ತ ಭಾವನೆಯೂ ಇದೆ:

ಪ್ರೇಮವೊಂದೆ ವಿಶ್ವಧರ್ಮ
ಸಮತೆಯೊಂದೆ ಎಲ್ಲ ನಿಯಮ.

(ಹೊಸಬಾಳಿಗಾಹ್ವಾನ)

ಕಾವ್ಯದ ವಿಷಯ ಹಾಗೂ ಸಾಧನ ಸಾಮಗ್ರಿಗಳಲ್ಲಿ ಈ ಸಂಗ್ರಹ ವೈವಿಧ್ಯಪೂರ್ಣವಾಗಿದೆ. ಪ್ರಕೃತಿಯ ಚೆಲುವಿಕೆಯ ಸಿರಿ, ಜೀವನದ ಹಿಗ್ಗು ಕುಗ್ಗು, ಹೃದಯದ ಹಂಬಲ, ಕಾಲನ ಲೀಲೆ – ಹಲವಾರು ಕುಡಿಯಾಗಿ ಕಾವ್ಯದ ಬಳ್ಳಿ ಹಬ್ಬಿದೆ; ಸರಳ ರಗಳೆಯಿಂದ ಜನ್ಮವೆತ್ತ ಮುಕ್ತ ಛಂದಸ್ಸನ್ನೇ ವಿಶೇಷವಾಗಿ ಇವರು ಉಪಯೋಗಿಸಿಕೊಂಡಿದ್ದರೂ ನವ್ಯ ಕಾವ್ಯ – ಓಂ! .... ಶಾಂತಿ – ಕಥನ ಕವನ – ಗವೀಶನಡಿ ತಾ ಕೈಬಾಸಮದು – ಗದ್ಯ ಗೀತೆ – ಕಾರುಣ್ಯ ದೃಷ್ಟಿ – ಮೊದಲಾದ ಧಾಟಿಗಳನ್ನು ಸಂದರ್ಭಕ್ಕೆ ತಕ್ಕಂತೆ ಉಪಯೋಗಿಸಿಕೊಂಡಿದ್ದಾರೆ.

"ನಿನ್ನದೊಂದು ಸುವರ್ಣ ಜ್ವಾಲೆ ನನ್ನ ದೇಹದಲಿರುವ
ಷಡ್ವೈರಿಗಳನು
ಭಸ್ಮಗೈದು ನನ್ನಾತ್ಮದ ಹಿರಿಮೆಯನು ಹೆಚ್ಚಿಸಲಿ!"

(ಕಾರುಣ್ಯ ದೃಷ್ಟಿ)

" ಅದೇ ಅರಳಿ ಪುಳುಕಿತಗೊಂಡಿರುವ - ಚೆಂಗುಲಾಬಿಯು - ಮಿಂದು - ಎದೆಯ ಮೇಲೆ ಕುಳಿತ ನವ ವಸಂತ ಮಾಸದ ಭ್ರಮರ ಮನದುಂಬಿ ಹಾಡುತಲಿದೆ - ನೃತ್ಯಗೈಯುತಲಿದೆ ! " ( ಪ್ರೀತಿ )

ಮೊದಲಾದವು ಉತ್ತಮ ಮಾದರಿಯ ಗದ್ಯಗೀತೆಗಳಾಗಿವೆ. ' ಓ ! ಕಾಲಪುರುಷ 'ದ ಓಟ ತಾಂಡವ ನೃತ್ಯಕ್ಕೆ ಹೊಂದಿಕೊಂಡು ಬಂದಿದೆ !

ಇಲ್ಲಿರುವ ಭಾವಾನುವಾದ ಮೂಲ ಕಾವ್ಯದಂತೆಯೇ ಪ್ರತಿಭಾನ್ವಿತವಾಗಿವೆ. ಭಾವಾನುವಾದ ಪರಕಾಯ ಪ್ರವೇಶದಷ್ಟು ಕಠಿಣ. ಮೂಲ ಕವಿಗಳ ಪ್ರತಿಭೆಗೆ ಕುಂದು ಬಾರದಂತೆ ರವೀಂದ್ರರ ಹಾಗೂ ಚಂಡಿದಾಸನ ಕವನಗಳನ್ನು ಪಂಚಾಕ್ಷರಿಯವರು ಕನ್ನಡಕ್ಕೆ ಪರಿವರ್ತಿಸಿದ್ದಾರೆ.

ಆಗ...ನಿನ್ನ ವಾಣಿ, ಪಕ್ಷಿಗಳ ಕಲಕಲ ಕೂಜನದಲಿ
ವನ-ನಿಕುಂಜಗಳಲಿ, ತುಟಿ ಅರಳಿಸುವ ಹೂಗಳಲಿ
ನಿನ್ನ ಸುಸ್ವರ ಪ್ರಸ್ಫುಟಿತಗೊಳುವದನು ನೋಡುವೆ !
( ಪ್ರಭಾತ ದರ್ಶನ )

ಇದು ಮೌಲಿಕ ಕಾವ್ಯವೆಂದೇ ಭಾಸವಾಗುತ್ತದೆ !

ಇವರ ಪ್ರತಿಭೆ ಬಹುಮುಖವಾಗಿದೆ. ಸಣ್ಣ ಕತೆಗಳ ಲೇಖಕರಾಗಿ, ಪತ್ರ ಸಾಹಿತ್ಯದ ಲೇಖಕರಾಗಿ, ಪತ್ರಿಕೋದ್ಯಮಿಗಳಾಗಿ – ಹಲವಾರು ದಿಶೆಗಳಲ್ಲಿ ಇವರು ಕಾರ್ಯರಂಗಕ್ಕಿಳಿದಿದ್ದಾರೆ. "He left scarcely any kind of writing untouched and touched nothing that he did not adorn " ಎಂದು ಗೋಲ್ಡ್‌ಸ್ಮಿಥ್‌ನ ಬಗೆಗೆ ಹೇಳಿದ ಮಾತು ಇವರನ್ನು ಕಂಡಾಗೆಲ್ಲ ಸ್ಮೃತಿ ಪಟಲದ ಮೇಲೆ ಸುಳಿಯುತ್ತದೆ.

ಧಾರವಾಡ
೧೦—೧—೧೯೫೫

– ಆರ್. ಸಿ. ಭೂಸನೂರಮಠ

# ನಲ್ಮಾತು

ಮಕರ ಸಂಕ್ರಮಣದ ಈ ಶುಭದಿನದಂದು 'ಚೈತ್ರಾಕ್ಷಿ' ಕವನಸಂಗ್ರಹವನ್ನು ಕಾವ್ಯಪ್ರೇಮಿಗಳಾದ ನಿಮ್ಮಗಳ ಕೈಯಲ್ಲಿಡುತ್ತಿದ್ದೇನೆ.

'ಚೈತ್ರಾಕ್ಷಿ'– ತಾಯ ಹರಕೆಯಲಿ, ತಾಯ್ತನದ ತಣ್ಪಿನಲಿ ಬೆಳೆದವಳು. ತಾಯಿ ನೀಡಿದ ಭಾಗ್ಯವನು ಮತ್ತೆ ತಾಯಿಗೆ ಅರ್ಪಿಸಿ 'ನಿನ್ನ ಹರಕೆ' ಎನಗೆ ಎಂದೂ ಇರಲೆಂದು ಬೇಡಿದ್ದೇನೆ.

ಈ ನಾಡಿನ ಹೆಸರಾಂತ ಸಾಹಿತಿಗಳಾದ ಸೋದರ ಶ್ರೀ ಭೂಸನೂರಮಠರು ಮುನ್ನುಡಿ ಬರೆದಿದ್ದಾರೆ. ಅವರ ಈ ಭ್ರಾತೃವಾತ್ಸಲ್ಯಕ್ಕೆ ನಾನೆಂದಿಗೂ ಋಣಿ.

ಬದುಕಿನಲ್ಲಿ ನಾನು ಪಡೆದಿರುವ ಭಾಗ್ಯ–ಹಲವು ವಿಶಾಲ ಹೃದಯದ ಸ್ನೇಹಿಗಳ ಸ್ನೇಹ. ಅಂಥ ಸ್ನೇಹಿಗಳ ವಾತ್ಸಲ್ಯ ಸುಧೆಯ ಪ್ರತೀಕ ಈ 'ಚೈತ್ರಾಕ್ಷಿ!' ಈ ಭಾಗ್ಯವನ್ನು ನೀಡಿರುವ ಸೋದರ ರುದ್ರಣ್ಣ, ಶಂಕರಣ್ಣ, ಸುಂಕಾಪುರ, 'ರವಿ,' ಜಿನದತ್ತ, 'ವಿರೂ'– ಈ ಉದಾತ್ತ ಜೀವಿಗಳಿಗೆಲ್ಲ ಮೌನವಾಗಿಯೇ ವಂದನೆ ಸಲ್ಲಿಸುತ್ತೇನೆ.

ಸುಂದರವಾದ ಮುಖ–ಚಿತ್ರ ಚಿತ್ರಿಸಿ 'ಚೈತ್ರಾಕ್ಷಿ'ಯ ಚೆಲುವನ್ನು ಹೆಚ್ಚಿಸಿರುವ ಪ್ರಸಿದ್ಧ ಚಿತ್ರಕಲಾವಿದ ಹಾಗೂ ಆತ್ಮೀಯ ಗೆಳೆಯ ಶ್ರೀ ಶಂಕರಗೌಡರ ಉಪಕಾರ ಬಹು ಹಿರಿದು.

ಇಲ್ಲಿಯ ಕೆಲವು ಕವನಗಳನ್ನು ತಮ್ಮ ಪತ್ರಿಕೆಗಳಲ್ಲಿ ಪ್ರಕಟಿಸಿದ ಸಂಪಾದಕರಿಗೆಲ್ಲ ಉಪಕೃತ.

ಈ ಸಂಗ್ರಹವನ್ನು ಸುಂದರವಾಗಿ ಮುದ್ರಿಸಿರುವ ಲಲಿತ ಮುದ್ರಣಾಲಯದ ಶ್ರೀ ಬಸವರಾಜ ಹೊರಡಿಯವರಿಗೆ ನೆನಿಕೆಗಳು.

ಧಾರವಾಡ
೧೪-೧-೫೯ } **ಪಂಚಾಕ್ಷರಿ ಹಿರೇಮಠ**

" ಅದೇ ಅರಳಿ ಪುಳುಕಿತಗೊಂಡಿರುವ - ಚಿಂಗುಲಾಬಿಯು - ಮಿದು - ಎದೆಯ ಮೇಲೆ ಕುಳಿತ ನವ ವಸಂತ ಮಾಸದ ಭ್ರಮರ ಮನದುಂಬಿ ಹಾಡುತಲಿದೆ - ನೃತ್ಯಗೈಯುತಲಿದೆ ! " ( ಪ್ರೀತಿ )

ಮೊದಲಾದವು ಉತ್ತಮ ಮಾದರಿಯ ಗದ್ಯಗೀತೆಗಳಾಗಿವೆ. ' ಓ ! ಕಾಲಪುರುಷ 'ದ ಓಟ ತಾಂಡವ ನೃತ್ಯಕ್ಕೆ ಹೊಂದಿಕೊಂಡು ಬಂದಿದೆ !

ಇಲ್ಲಿರುವ ಭಾವಾನುವಾದ ಮೂಲ ಕಾವ್ಯದಂತೆಯೇ ಪ್ರತಿಭಾನ್ವಿತವಾಗಿವೆ. ಭಾವಾನುವಾದ ಪರಕಾಯ ಪ್ರವೇಶದಷ್ಟು ಕಠಿಣ. ಮೂಲ ಕವಿಗಳ ಪ್ರತಿಭೆಗೆ ಕುಂದು ಬಾರದಂತೆ ರವೀಂದ್ರರ ಹಾಗೂ ಚಂಡಿದಾಸನ ಕವನಗಳನ್ನು ಪಂಚಾಕ್ಷರಿಯವರು ಕನ್ನಡಕ್ಕೆ ಪರಿವರ್ತಿಸಿದ್ದಾರೆ.

ಆಗ....ನಿನ್ನ ವಾಣಿ, ಪಕ್ಷಿಗಳ ಕಲಕಲ ಕೂಜನದಲಿ
ವನ-ನಿಕುಂಜಗಳಲಿ, ತುಟಿ ಅರಳಿಸುವ ಹೂಗಳಲಿ
ನಿನ್ನ ಸುಸ್ವರ ಪ್ರಸ್ಫುಟಿತಗೊಳುವದನು ನೋಡುವೆ !
( ಪ್ರಭಾತ ದರ್ಶನ )

ಇದು ಮೌಲಿಕ ಕಾವ್ಯವೆಂದೇ ಭಾಸವಾಗುತ್ತದೆ !

ಇವರ ಪ್ರತಿಭೆ ಬಹುಮುಖವಾಗಿದೆ. ಸಣ್ಣ ಕತೆಗಳ ಲೇಖಕರಾಗಿ, ಪತ್ರ ಸಾಹಿತ್ಯದ ಲೇಖಕರಾಗಿ, ಪತ್ರಿಕೋದ್ಯಮಿಗಳಾಗಿ – ಹಲವಾರು ದಿಶೆಗಳಲ್ಲಿ ಇವರು ಕಾರ್ಯರಂಗಕ್ಕಿಳಿದಿದ್ದಾರೆ. "He left scarcely any kind of writing untouched and touched nothing that he did not adorn" ಎಂದು ಗೋಲ್ಡ್‌ಸ್ಮಿಥ್‌ನ ಬಗೆಗೆ ಹೇಳಿದ ಮಾತು ಇವರನ್ನು ಕಂಡಾಗೆಲ್ಲ ಸ್ಮೃತಿ ಪಟಲದ ಮೇಲೆ ಸುಳಿಯುತ್ತದೆ.

ಧಾರವಾಡ
೧೦—೧—೧೯೬೪

– ಆರ್. ಸಿ. ಭೂಸನೂರಮಠ

# ನಲ್ಮಾತು . . .

ಮಕರ ಸಂಕ್ರಮಣದ ಈ ಶುಭದಿನದಂದು 'ಚೈತ್ಯಾಕ್ಷಿ' ಕವನಸಂಗ್ರಹವನ್ನು ಕಾವ್ಯಪ್ರೇಮಿಗಳಾದ ನಿಮ್ಮಗಳ ಕೈಯಲ್ಲಿಡು-ತ್ತಿದ್ದೇನೆ.

'ಚೈತ್ಯಾಕ್ಷಿ'– ತಾಯ ಹರಕೆಯಲಿ, ತಾಯ್ತನದ ತಣ್ಪಿನಲಿ ಬೆಳೆದವಳು. ತಾಯಿ ನೀಡಿದ ಭಾಗ್ಯವನು ಮತ್ತೆ ತಾಯಿಗೆ ಅರ್ಪಿಸಿ 'ನಿನ್ನ ಹರಕೆ' ಎನಗೆ ಎಂದೂ ಇರಲೆಂದು ಬೇಡಿದ್ದೇನೆ.

ಈ ನಾಡಿನ ಹೆಸರಾಂತ ಸಾಹಿತಿಗಳಾದ ಸೋದರ ಶ್ರೀ ಭೂಸನೂರಮಠರು ಮುನ್ನುಡಿ ಬರೆದಿದ್ದಾರೆ. ಅವರ ಈ ಭ್ರಾತೃವಾತ್ಸಲ್ಯಕ್ಕೆ ನಾನೆಂದಿಗೂ ಋಣಿ.

ಬದುಕಿನಲ್ಲಿ ನಾನು ಪಡೆದಿರುವ ಭಾಗ್ಯ–ಹಲವು ಶಾಲು ಹೃದಯದ ಸ್ನೇಹಿಗಳ ಸ್ನೇಹ. ಅಂಥ ಸ್ನೇಹಿಗಳ ವಾತ್ಸಲ್ಯ ಸುಧೆಯ ಪ್ರತೀಕ ಈ 'ಚೈತ್ಯಾಕ್ಷಿ!' ಈ ಭಾಗ್ಯವನ್ನು ನೀಡಿರುವ ಸೋದರ ರುದ್ರಣ್ಣ, ಶಂಕರಣ್ಣ, ಸುಂಕಾಪುರ, 'ರವಿ,' ಜಿನದತ್ತ, 'ವಿರೂ'– ಈ ಉದಾತ್ತ ಜೀವಿಗಳಿಗೆಲ್ಲ ಮೌನವಾಗಿಯೇ ವಂದನೆ ಸಲ್ಲಿಸುತ್ತೇನೆ.

ಸುಂದರವಾದ ಮುಖ–ಚಿತ್ರ ಚಿತ್ರಿಸಿ 'ಚೈತ್ಯಾಕ್ಷಿ'ಯ ಚೆಲುವನ್ನು ಹೆಚ್ಚಿಸಿರುವ ಪ್ರಸಿದ್ಧ ಚಿತ್ರಕಲಾವಿದ ಹಾಗೂ ಆತ್ಮೀಯ ಗೆಳೆಯ ಶ್ರೀ ಶಂಕರಗೌಡರ ಉಪಕಾರ ಬಹು ಹಿರಿದು.

ಇಲ್ಲಿಯ ಕೆಲವು ಕವನಗಳನ್ನು ತಮ್ಮ ಪತ್ರಿಕೆಗಳಲ್ಲಿ ಪ್ರಕಟಿಸಿದ ಸಂಪಾದಕರಿಗೆಲ್ಲ ಉಪಕೃತ.

ಈ ಸಂಗ್ರಹವನ್ನು ಸುಂದರವಾಗಿ ಮುದ್ರಿಸಿರುವ ಲಲಿತ ಮುದ್ರಣಾಲಯದ ಶ್ರೀ ಬಸವರಾಜ ಹೊರಡಿಯವರಿಗೆ ನೆನಿಕೆಗಳು.

ಧಾರವಾಡ
೧೪ - ೧ - ೫೯ } **ಪಂಚಾಕ್ಷರಿ ಹಿರೇಮಠ**

# ಒಳ ತಿರುಳು . . .




# …ತ್ರ್ಯಕ್ಷಿ !

ಬಂದಾರೆ ಬಾರೆ
ಮಕರಂದ ಸೊಗಸೆ
ನೆಲಿಸ್ಯಾರ ನೆಲಿಸೆ
ಎದೆಯಾಳದಲ್ಲೆ

ಜನುಮ ಜನುಮಕೂ
ನೀ ನೊಲಿದು ಬಾ
ಬದುಕು ಬದುಕಿಗೂ
ನೀ ಬೆಳೆದು ಬಾ

ಕವಿಗೆ ವಾಣಿಯಾಗಿ
ಕವಿತೆಯಾಗ ಬಾ
ಜೀವ ಜೀವದಲಿ
ಬೆರೆತು ಹಾಡು ಬಾ

ಬಂದಾರೆ ಬಾರೆ
ಮಕರಂದ ಸೊಗಸೆ
ನೆಲಿಸ್ಯಾರ ನೆಲಿಸೆ
ಎದೆಯಾಳದಲ್ಲೆ

ಚೈತ್ರ್ಯಾಕ್ಷಿ

ನೇಹವೋ ನಲುಮೆಯೋ
ಏನೆಂಥ ಲೀಲೆಯೋ
ತಿಳುವಿನಾಚಿನ ಮಾತ
ತಿಳುಹಿ ಅರುಹ ಬಾ

ನಿನ್ನ ಹೃದಯಾರವಿಂದ
ಮಕರಂದ ಸವಿದು
ನಿನ್ನ ಹೂ-ದುಟಿಯ ಹಾಲ್ಜೇನ
ಸುರಿಸಿ 'ನಾನಿನ್ನ ಸುಖಿ'ಎಂದೆ

ನೂರು ಚಿಂತೆಯಲಿ ಬೆಂದು
ಬೇಗುದಿಗೊಂಡು ಬರೆ
ತುಟಿಗೆ ತುಟಿಯಿಟ್ಟು
ಸುಖವ ನೀಡಿದಾಕೆ

ಬಂದಾರೆ ಬಾರೆ
ಮಕರಂದ ಸೊಗವೆ
ನೆಲಿಸ್ಯಾರ ನೆಲಿಸೆ
ಎದೆಯಾಳದಲ್ಲಿ

ಪ್ರೇಮ ಪ್ರೀತಿಗಳ
ಸಂಗಮವೆ
ಚೆಲುವು ಒಲುವುಗಳ
ಆಗರವೆ

ಚೈತ್ರಾಕ್ಷಿ.

ನೀನೊಲಿದು ಬಂದುದೇ
ನನ್ನ ಬದುಕಿನ ಪೂರ್ಣತೆ
ನೀನಿತ್ತ ಪ್ರೇಮ ಪಿಯೂಷವೆ
ನನ್ನ ಬಾಳಿನ ಸಾರ್ಥಕತೆ

ನಿನ್ನ ಮುತ್ತೋ ಚೈತನ್ಯದಕ್ಷಿ
ನಿನ್ನ ಒಲವೋ ನನ್ನ ಬಾಳ್ಗೆ ಗೆಲವು
ಎದೆಗೆ ಎದೆಯನೊತ್ತಿ
ಬಾಳಿನಲ್ಲಿಲ್ಲ ಹರ್ಷವರ್ಷಗರೆದಾಕೆ

ಮನ ಮನದಲೂ
ಮುದಗೂಡಿ ಬಾ
ರಕ್ತ ರಕ್ತದಲೂ
ಸ್ಫುರಿಸು ಬಾ

ಬಂದಾರೆ ಬಾರೆ
ಮಕರಂದ ಸೊಗವೆ
ನೆಲಿಸ್ಯಾರ ನೆಲಿಸೆ
ಎದೆಯಾಳದಲ್ಲೆ

ಚೈತ್ರಾಕ್ಷಿ

ಆವುದನು ಕಂಗಳಿವು ನೋಡುತಿವೆ ಪ್ರೀತಿಯಿಂ
ಅಂಗಾಂಗದಲಿ ರಸವು ಕಣ್ಣಿನೊಳಗಮೃತಂ
ಉಸಿರ ತೆರೆ ತೆರೆಯೊಳಗೆ ಕುಸುಮ ಜೀವಂ

ರೆಪ್ಪೆಯಾಳಗಳಲಿ ಕನಸು ನನಸ ಪೊತ್ತು
ಕುರುಳುಗಳ ಹೊರಳಿನಲಿ ಮೋಹಮಂ ಬಿತ್ತು
ಮಾತನಾಡಿದರದೋ ಹೂಮಳೆ ಸುರಿದುದೋ
ಕುಳಿತು ಬಿಟ್ಟರೆ ಅವಳು ತಾಳಿ ಚಿರಮೌನಮಂ
ನಿಶ್ಯಬ್ದತೆಯನೊಡೆದು ಸೂಸುತಿದೆ ಸಂಗೀತ
ಕಣ್ಣೆತ್ತಿ ಅವಳು ಮತ್ತೊಮ್ಮೆ ನೋಡಿದಳೊ
ನೇಸರನ ತೇಜವೇ ಒಂದಾಗಬಹುದೇನೊ
ಆದರೂ ಕೆನ್ನೆಯಲಿ ನೆಲಿಸಿರುವುದೌದಾಸ್ಯ
ಪುಷ್ಪಗಳ ಮೇಲಿರುವ ಮಂಜು ಮಣಿಯಂತೆ
ಬಾನಿನಲಿ ಸುತ್ತಲೂ ಹಬ್ಬಿರುವ ಪ್ರತಿಬಿಂಬದಂತೆ
ಬೆಳಗಿನಲಿ ಮುಸುಕಿರುವ ಮಂಜಿನಂತೆ
ಪೂರ್ಣ ಚಂದ್ರನ ಕಾಂತಿಗೆ ಮೋಡಗಳ ಹೊಂದಿಕೆಯಂತೆ

ಆವುದನು ಕಂಗಳಿವು ನೋಡುತಿವೆ ಪ್ರೀತಿಯಿಂ
ಅಂಗಾಂಗದಲಿ ರಸವು ಕಣ್ಣಿನೊಳಗಮೃತಂ
ಉಸಿರ ತೆರೆ ತೆರೆಯೊಳಗೆ ಕುಸುಮ ಜೀವಂ



# ಕನ್ನಡ ರವಿ

ಉದಯಿಸುತಲಿಹನಿಂದು ಕನ್ನಡದ ರವಿಯಲ್ಲಿ
ಹೃದಯ ಕುಸುಮದ ಚಲುವು ಹೊರಚಲ್ಲುವಲ್ಲಿ !

ಈ ಸಿರಿಗನ್ನಡ ನಾಡಿನಲಿ
ಪೆಂಪುಗಳಿಂಪಿನ ಭೂಮಿಯಲಿ
ಚಿನ್ನದ ಚಿಗುರಿನ ಮನದಲ್ಲಿ
ಸುವರ್ಣ ಭೂಮಿಯ ಒಡಲಲ್ಲಿ !

ಉದಯಿಸುತಲಿಹನಿಂದು ಕನ್ನಡದ ರವಿಯಲ್ಲಿ
ಹೃದಯ ಕುಸುಮದ ಚಲುವು ಹೊರಚಲ್ಲುವಲ್ಲಿ !

ಕನ್ನಡ ನಾಡಿನ ಧೀರ ರವಿ
ತನ್ಮಯ ಚಿನ್ಮಯ ಕಿರಣದಲಿ
ನಾಡಿನ ಸಂದೇಶವನೊಡಮೂಡಿಸಿ
ತರುಣರ ಮನವನು ಸೆಳೆಯುತಲಿ

ಉದಯಿಸುತಲಿಹನಿಂದು ಕನ್ನಡದ ರವಿಯಲ್ಲಿ
ಹೃದಯ ಕುಸುಮದ ಚಲುವು ಹೊರಚಲ್ಲುವಲ್ಲಿ !

ಕನ್ನಡತಿಯೊಡಲಾಸೆ ದೀಪ್ತಿಯನು ಬೆಳಗಿಸಲು
ಕನ್ನಡದ ಜನತೆಯ ಬಯಕೆಗಳ ತುಂಬಿಸಲು

. . . ಚೈತ್ರಾಕ್ಷಿ

ಕನ್ನಡಿಗರನೆಚ್ಚರಿಸಿ ಸ್ಫೂರ್ತಿಯನ್ನೀಯಲು
ನಾಡಿನಲ್ಲೆಲ್ಲ ಚಿಜ್ಯೋತಿಯಂ ಪಸರಿಸಲು

ಉದಯಿಸುತಲಿಹನಿಂದು ಕನ್ನಡದ ರವಿಯಲ್ಲಿ
ಹೃದಯ ಕುಸುಮದ ಚಲುವು ಹೊರಚಲ್ಲುವಲ್ಲಿ !

ಜಯಮಾಲೆಯನು ಪಿಡಿದು
ಮಂಣು ಹೊನ್ನಾಗಿಸಲು
ಕನ್ನುಡಿಯ ಚಲುವ ಬೆಳಗಿಸಲು
ಅಲ್ಲಮಪ್ರಭುದೇವ ಶಂಕರರ ನಾಡಿನಲಿ

ಉದಯಿಸುತಲಿಹನಿಂದು ಕನ್ನಡದ ರವಿಯಲ್ಲಿ
ಹೃದಯ ಕುಸುಮದ ಚಲುವು ಹೊರಚಲ್ಲುವಲ್ಲಿ !

ಕಂನಾಡ ಕೀರ್ತಿಯನು ಮತ್ತೆ ಪ್ರಜ್ವಲಿಸೆ
ಕರುನಾಡ ಬಯಲೊಳಗೆ ಸೌರಭವ ಸುರಿಸಲಿಕೆ
ನಾಡ ತಮವನು ಕಳೆದು ಹೊಸ ಬೆಳಕ ನೀಡಲಿಕೆ
ಸುಖ ಶಾಂತಿ ಸಮೃದ್ಧಿ ಸುತ್ತಲೂ ನೆಲಿಸಲಿಕೆ

ಉದಯಿಸುತಲಿಹನಿಂದು ಕನ್ನಡದ ರವಿಯಲ್ಲಿ
ಹೃದಯ ಕುಸುಮದ ಚಲುವು ಹೊರಚಲ್ಲುವಲ್ಲಿ !!

ಚೈತ್ರಾಕ್ಷಿ . . .

# ಓಂ! .... .... ಶಾಂತಿ

ನಿಶೆಯ ಮಡಲಲಿ ಸೋತು ಬಿದ್ದಿದೆ ಬದುಕು
ದಿನಕರ್ಮ ಮುಗಿಸಿದ ಸಂತೋಷದಲಿ !
ಮುಗಿಲ ಮಾಳಿಗೆಯಲಿ ಅಲ್ಲಿ ಇಲ್ಲಿ ಎಲ್ಲಲ್ಲಿ
ಫಕ ಫಕನೆ ಹೊಳೆಯುತಿವೆ ನಕ್ಷತ್ರ, ಸಾಲು ಸಾಲಾಗಿ
ಬಿಕ್ಕೆ ಬೇಡಿ ತಂದ ಎರವಲ ಬೆಳಕಿನಂತೆ

*

ಎತ್ತಣಿಂದಲೋ ಬಂತು-ಬಂದು ಬಡಿಯಿತು ನಿಶೆಯ
ನಿದ್ರೆಗೆ-ಅಯ್ಯೊ ಬಂತೆ ಗೋಳು (?) ಅಳು, ದುಃಖ !
ಅಹುದು ! ಅಳು ದುಃಖ, ಸತ್ತವನಿಗಾಗಿ (!)
ಮತ್ತೆ ಎಲ್ಲಿಂದಲೋ ತೇಲಿ ಬಂದಿತು
ಗಿರಿ ಗಿರಿಯ ಹಾರಿ ಗರಿ ಗರಿಯ ತೂರಿ
ಗಾಳಿ ಮೈಯನೇರಿ ನಾಯಿ, ನರಿಯ ಕೂಗು !

[ ಭ್ರಾತೃದೇವೋ ಭವಃ....... ]

ಕೊಲೆ ! ಮಣ್ಣು ಮಣ್ಣನು ತುಳಿದಿದೆ
ಕೇಕೆ ಹಾಕಿ ಕುಣಿದಿದೆ ಮತ್ತೆ ತಣಿದಿದೆ !
ಯಾರೋ ಕೇಳಿದರು: 'ಯಾಕೆ ? ಯಾಕೆ ?
ಹುಡಿಯಾಯಿತು ?' 'ಏನು ? ಪುಡಿಯಾಯಿತೇ ?'
' ನೆಲಕೆ ಒಲವನುಣಿಸಿದನಂತೆ ! '

- ಚೈತ್ಯಾಕ್ಷಿ

[ ಶ್ರದ್ಧಯಾರ್ಚಿತುಮಿಚ್ಛತಿ । ತಸ್ಯ ತಸ್ಯಾಚಲಾಂ
ಶ್ರದ್ಧಾಂ ತಾಮೇವ ವಿದಧಾಮ್ಯಹಮ್ ]

ಬೆಳಕಿನೆಡೆಯನೊತ್ತಿ ಕತ್ತಲು ಹೆಡೆಯನೆತ್ತಿ ನಿಂತಿದೆ
ಬಾಳ ಹಂದರದಲ್ಲಿ !

[ ತಮಸೋ ಮಾ ಜ್ಯೋತಿರ್ಗಮಯ ... ]

*

ಅದರ ಮುರಿದ ಕೈ ಮುರಿದ ಕಾಲು ಬಿದ್ದಿವೆ
ಮೂರು ಮೊಳದ ಮೂಳೆಯ ‘ ಸತ್ಯ ಬಂಧುರ ! ’

*

ಉಸಿರು ಕಟ್ಟಿದೆ ನೆಲಕೆ........
ಬಸಿರು ಒಡೆದಿದೆ ಬುವಿಗೆ........

*

ಮೂಲೆಯಲಿ ನೆಲದ ಕಣ ತೆರೆಯುತಿದೆ ಬಾಯಿ
ಒಮ್ಮೆ ಮಗು !
ಒಮ್ಮೆ ತಾಯಿ...............
ಕೂಗು ಸದ್ದು....
ಹೆಚ್ಚಿರಿ ಕೈಗಳನು.....
ಹಣೆಯನಳಿಸಿ ಹಾಕೆ.....
ಮುಡಿ ? ಬದಿಯಲಿದ್ದ ಯುವಕ ನುಡಿದ
ಓ ! ಇರಲಿಬಿಡಿ ಇನ್ನು ಸಣ್ಣಕೆ !
ಮತ್ತೆ ಅಳು, ಬಿಕ್ಕಳಿಕೆ ಎದುರಿಗಿರುವ
ಹೆಣದ ಹಂದರಕೆ !

ಚೈತ್ರಾಕ್ಷಿ .

ಸಭೆ, ಸಂಸ್ಥೆಗಳಲಿ : Meetingsಉ ಕಂಡೊಲನ್ಸu
'ಆತ ಪುಣ್ಯ ಪುರುಷ, ಮೋಕ್ಷ ಸಿಗಲಿ !'

*

ಅಳುವವರ ಪಾಲಿಗಿದೆ ನೆಲದೊಡಲು ಮತ್ತೆ ಬಾನು ಬಯಲು
ಮತ್ತೆ ಬಾನೆಡೆಗೆ ನಡೆದವಗೆ ಆ ಭಗವಂತನೇ ಪಾಲು !
ಎಲ್ಲವನೂ ತ್ಯಜಿಸಿ ನಡೆದಿಲ್ಲವೇ ಆತನಡಿಗೆ ಈತ
[ ಸರ್ವ ಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ
.................................................................. ]
ಅಂತೇ ಮೋಕ್ಷ; ಮುಂಗೈಯ ತುತ್ತು
ಆ ಕುಂಭ ಮೇಳದಲಿ, ತುಳಿತದಲಿ ಸತ್ತವರ
ಕುರಿತು ಕನಿಕರದ ವರವ ಕೊಡಲಿಲ್ಲವೇ (?)
'ಮೋಕ್ಷ ಲಭಿಸಿದೆ ಅವರಿಗೆ' – ಎಂದು – ಅಂಥ ಮೋಕ್ಷ!
ಎಲ್ಲ ಧರ್ಮಗಳ ಬಿಟ್ಟು, ಒಟ್ಟು ಅವನಿಗೆ ತಲೆಕೊಟ್ಟು
ಹೊರಟವಗೆ ಮೋಕ್ಷ.
[ "....Rajas and Tamas change into their divine substitute." ]
ಓ ! ಅದು ಭಾರಿ ಬಿಜಿನೆಸ್ಸು
....Exportಉ ಇಂಪೋರ್ಟ್u
.... ಒಮ್ಮೆ ರಜಸ್ಸು, ಒಮ್ಮೆ ತಮಸ್ಸು
ಆ ಬಿಜಿನೆಸ್ಸುಗಾರ ಎಲ್ಲದರ ಸಾಕಾರ
[ ಓಂ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್
ಪೂರ್ಣ ಮುದುಚ್ಯತೇ ।
ಪೂರ್ಣಸ್ಯ ಪೂರ್ಣಮಾದಾಯ ಪೂರ್ಣ ಮೇವಾವ ಶಿಷ್ಯತೇ ॥ ]
ಓಂ ಶಾಂತಿ ಶಾಂತಿ ಶಾಂತಿಃ

ಚೈತ್ಯಾಕ್ಷಿ

# ಬೆಳಗು ಬಂದಿದೆ

ಬೆಳಗು ಬಂದಿದೆ
ಬೆಳಕು ತಂದಿದೆ
ಬಾಗಿಲ ತೆರೆ ತಾಯಿ
ಬೆಳಗು ಬಂದಿದೆ

ಪೂರ್ವ ದಿಕ್ಕು ಕೆಂಪಾಗಿ
ನೆಲ ಜಲ ರಂಗಾಗಿ
ಬಂದಿದೆ, ಬಾಗಿಲ ತೆರೆ ತಾಯಿ
ಬೆಳಗು ಬಂದಿದೆ

ಅರುಣನುದಯದಿ
ಸಕಿರಣ ಚಂದದಿ
ಚಲುವಾಗಿ ಬಂದಿದೆ
ಬಾಗಿಲ ತೆರೆ ತಾಯಿ
ಬೆಳಗು ಬಂದಿದೆ

ಬೆಳಗಿನಾ ಮಹಾ ಬೆಳಗು
ನಿತ್ಯ ಚಿನ್ಮಯ ಬೆಳಕು
ಬಂದಿದೆ ಬಾಗಿಲ ತೆರೆ ತಾಯಿ
ಬೆಳಗು ಬಂದಿದೆ

ಚೈತ್ರಾಕ್ಷಿ

ಮರವೆಯಾ ಕತ್ತಲೆಯ
ಓಡಿಸಲು ತಾ ಅರಿವಿನಾ
ಬೆಳಕು ಬಂದಿದೆ
ಬಾಗಿಲ ತೆರೆ ತಾಯೆ
ಬೆಳಗು ಬಂದಿದೆ

ಹೊತ್ತು ಹೋಗುತಲಿಹುದು ಮತ್ತೆ
ಬಾರದು ತಾಯೆ, ಬೆಳಕು ಬಂದಿದೆ
ಬಾಗಿಲ ತೆರೆ ತಾಯೆ
ಬೆಳಗು ಬಂದಿದೆ

ಹೊತ್ತು ಹೋಗದ ಮುನ್ನ
ಬೆಳಕು ಕಳೆಯದ ಮುನ್ನ
ಬಾಗಿಲ ತೆರೆ ತಾಯೆ
ಬೆಳಗು ಬಂದಿದೆ

ಮನದ ಬಾಗಿಲ ತೆರೆ ತಾಯೆ
ಬೆಳಗು ಬಂದಿದೆ
ತಾ ಬೆಳಕ ತಂದಿದೆ
ಬಾಗಿಲ ತೆರೆ ತಾಯೆ
ಬೆಳಗು ಬಂದಿದೆ

. . . ಚೈತ್ರಾಕ್ಷಿ

# ಕಣ್ದುಂಬಿ ಬಂದಿದೆ

........ಕಣ್ದುಂಬಿ
ಮನದುಂಬಿ, ಶೋಕರಸದಿ
ಎದೆಯು ಬಟ್ಟಲುದುಂಬಿ ಬಂದಿದೆ

ಪ್ರತಿದಿನದ, ಪ್ರತಿರಾತ್ರಿ
ಅತ್ತತ್ತು, ಕಂಣೀರ ಕೋಡಿ
ತಾ ಹರಿದು, ಎದೆಯು ಬರಿಯ ಬಂದಿದೆ

ನೀರ್ದುಂಬಿದ ಕಂಣು
ಮಂಜಾಗಿ, ಮಬ್ಬಾಗಿ ಕತ್ತಲೆ -
ದೋರೆ, ನಿನ್ನನೆನಹು ಬಗೆಗಂಣ ತೆರೆಯುತಿದೆ

ಕಡೆಗೊಮ್ಮೆ ಮರಣದಪ್ಪುಗೆಯಲಿ
ತನ್ನದೆಲ್ಲವನರ್ಪಿಸಬೇಕೆಂದು, ವಿರಹ
ಜೀವ ಹಗಲಿರುಳು ಪರಿತಪಿಸುತಿದೆ

ಇತ್ತ ನನ್ನ ಪಾಡು ಇಂತಿರಲು
ಅತ್ತ ದೂರದಲಿರುವ ನೀ, ಸುಖದಿ
ಜೀವಿಸುತಿರುವೆಯೆಂದು ಹೇಗೆ ಭಾವಿಸಲಿ



ಚೈತ್ರಾಕ್ಷಿ . . .

' ನಿಮ್ಮ ಬಗೆಗೆ ಎಲ್ಲವನೂ ಬರೆಯಿರಿ '
ಎಂದು ಬರೆದರೆ ನಾನು
ಏನೊಂದು ಎಷ್ಟೊಂದು ಬರೆಯಲಿ

ಒಡೆದ ಕನ್ನಡಿಯ ಬಾಳು
ಬರೆದು ತಿಳಿಸುವುದೇನು ?
ನಿನಗರಿಯದುದೇನಿಹುದು ಎನ್ನೊಲವೆ ?

ಎನ್ನ ಪಾಡು ಏನೇ ಇರಲಿ
ನೀ ಮಾತ್ರ ಅತ್ತತ್ತು ಕಾಲ
ಕಳೆಯಬೇಡ ಎನ್ನಾತ್ಮದರಸಿ

ಉರಿಬರಲಿ ಸಿರಿಬರಲಿ
ಬಾಳಿನಲಿ ಬಂದುದೆಲ್ಲವೂ
ಶಿವ ಕಾರುಣ್ಯ ಶಿವ ಪ್ರಸಾದ

ಹಂಬಲಿಸಿ ಹೇಳುತಿಹೆ

ಅಳುವುದೆಂದಿಗು ಬೇಡ

ಕಂಣೀರನೊರಸಿಕೊ

ಅಯ್ಯೊ . . ಕಣ್ತುಂಬಿ ಬಂದಿದೆ !

# ಅಕ್ಕನೋಲೆಯನೋದಿ

“ ಸೊಸೆಯ ಮದುವೆಗೆ ಎನ್ನ ಕರೆಯಿಸಲು
ಮರೆಯದಿರು ” ಎಂದು ನಾ ಬರೆದಾಗ
“ ಆದರದ ಸೋದರ ಮಾವನನು ಬಿಟ್ಟು
ಅದು ಲಗ್ನವಾಗುವದುಂಟೆ? ” ಎಂಬ
ಮುತ್ತು ಮಾಣಿಕದ ಸಾಲು ಅಕ್ಕರತೆಯ
ಅಕ್ಕನೋಲೆಯೊಳಿತ್ತು . . . .

ಚಲುವು ಸೌಜನ್ಯಗಳು ನರ್ತಿಸುತಲಿಹವು
ಅದ ಕಂಡು ಕಂಗಳರಳಿದವು, ಆ ಓಲೆಯೋದಿಟ್ಟು.
ಅಂದವದು ಕಂಗಳಿಗೆ ಸಹೃದಯನಾತ್ಮಕ್ಕೆ
ಚಂದವಪ್ಪುದು, ತೆರತೆರದಿ ರಸಭಕ್ಷ್ಯ
ನವನೀತವಂ ತಂದೀಂಟಿತೆನ್ನಾತ್ಮಕೆ ಆ ಓಲೆ
ಬಹುವಿಧದಿ ಸಂತಸವನುಣಿಸಿ ತಣಿಸಿ
‘ ತಮ್ಮಾ 8 ’ ಎಂದು ಒಪ್ಪಿ, ಸಲಹಿದೆ ತಾಯೇ
ಮಮತೆಯ ಅಕ್ಕ ವಂದಿಪೆ ತವಪಾದ ಪದ್ಮಂಗಳಿಗೆ.




# ಸರ್ವಾರ್ಪಣ



ಓ ! ತಾಯಿ ! ಇಂಬುಗೊಡು
ಶರಣಾಗಿ ಬಂದಿಹೆನು
ಗತಿಗೆಟ್ಟು ಬಂದಿಹೆನು
ಮಾನಾಪಮಾನವೆಲ್ಲವೂ ನಿನ್ನವೆಂದು

ನನ್ನೆಲ್ಲ ವಿಚಾರಗಳಲಿ
ನನ್ನೆಲ್ಲ ಬಾಳ ಘಟನೆಗಳಲಿ
ನನ್ನ ರಕ್ತದ ಕಣ ಕಣದಲಿ
ನೀನಿರುವೆಯೆಂದು ನಂಬಿ ನಚ್ಚಿಹೆನು

ಕಷ್ಟದಲಿ ಕಂಗೆಟ್ಟು ನಶ್ವರದ
ಮನೆಮಾರುಗಳ ಬಿಟ್ಟು
ಕಾಡಿನಲಿ ತಿರುಗಿ ಬೇಸತ್ತು
ನಿನ್ನಡಿಯ ಹುಡಿಯಾಗ ಬಂದಿಹೆನು

ಕರುಣೆಯಿಂ ಇಂಬುಗೊಡು ಓ ! ತಾಯಿ ಜಯದೇವಿ
ನಿನ್ನನೇ ನಂಬಿ ಬಂದಿಹೆನು, ನಿನ್ನ ಪಾದತಲದಲಿ
ನನ್ನದೆನ್ನುವದೆಲ್ಲವನು ಸರ್ವಾರ್ಪಣ
ಭಾವದಲಿ ಅರ್ಪಿಸಲು ಓ ! ತಾಯಿ

ಓ ! ತಾಯೆ ! ಇಂಬುಗೊಡು
ಶರಣಾಗಿ ಬಂದಿಹೆನು
ಗತಿಗೆಟ್ಟು ಬಂದಿಹೆನು
ಮಾನಾಪಮಾನವೆಲ್ಲವೂ ನಿನ್ನವೆಂದು

# ಓ! ಕಾಲಪುರುಷ . . .

ನೃತ್ಯಗೈ ಓ ! ಕಾಲಪುರುಷ ನೃತ್ಯಗೈ !
ದಿಕ್ತಟಕೂ ಸುತ್ತಿಬರುವಂತೆ ನೃತ್ಯಗೈ !

*

ಭಸ್ಮ, ತ್ರಿಪುಂಡ್ರ
ಮಾರ್ತಂಡ, ಚಂದ್ರಯುಗ ದೀಪ್ತಿನೇತ್ರ
ಬ್ರಹ್ಮಾಂಡವೂ ನಡಗುವಂತೆ ನೃತ್ಯಗೈ !

*

ರುದ್ರಾಕ್ಷಿ, ಸರ್ಪಭೂಷಣ
ತಾಂಡವ ಲಾಸ್ಯ, ಉಭಯಮುದ್ರಾ
ಪ್ರತಿಹೆಜ್ಜೆಗೂ ಹೊಸ ಗತಿ ನೃತ್ಯಗೈ !

*

ತ್ರಿಶೂಲಿ, ಗಂಗಾಧರ
ಗಜ, ವ್ಯಾಘ್ರ ಚರ್ಮಧಾರಿ, ಜಟಾಜೂಟಿ
ಓ ! ವಿಶ್ವಭಂಜಕ ಭಾಸ್ಕರ ನೃತ್ಯಗೈ !

*

ಸರ್ವೇಶ, ಗೌರೀಶ
ಓ ! ಮಹಾಕಾಲ ಓ ! ಕಾಲಪುರುಷ
ಪ್ರಚಂಡ ಭವ್ಯಾಕಾರ ಸಾಕಾರ ನೃತ್ಯಗೈ !

ನೂತನ ನರ್ತನ
ಕರಪದ ಮುದ್ರೆ ನೂತನ ನೂಪುರ
ಢಮರುಗದ ನವೀನ ಸ್ವರದಿಂ ನೃತ್ಯಗೈ !

*

ಸಕಲ ಕಲಾನಿಧಿ
ಸರ್ವ-ಅಲಂಕೃತ ಭೂಷಣ
ಸಕಲ ಸಚ್ಚಿದಾನಂದ ನಿರ್ಮಲ ನೃತ್ಯಗೈ !

*

ಆಕಾರ, ನಿರಾಕಾರ
ನಿರ್ವಿಕಾರ, ಲೀನೊಂದು ಉಳಿದು ಕೆಡುಕೆಲ್ಲ
ಅಳಿವಂತೆ ಓ ! ಮಹಾಕಾಲ ನೃತ್ಯಗೈ !!

*

ನೃತ್ಯಗೈ ಓ ! ಕಾಲಪುರುಷ ನೃತ್ಯಗೈ !
ದಿಕ್ತಟಕೂ ಸುತ್ತಿಬರುವಂತೆ ನೃತ್ಯಗೈ !

ಚೈತ್ಯಾಕಿ.

# ಕಾರುಣ್ಯ ದೃಷ್ಟಿ . . .

ದಿವಾರಾತ್ರಿ ಒಂದು ಕ್ಷುಲ್ಲಕ ಬಯಕೆ ನನ್ನ ಆದರ್ಶವನು ನಾಶಗೊಳಿಸುತಿದೆ; ಅದರಿಂದ ಮುಕ್ತ ಮಾಡು ಪ್ರಿಯ!

ಈ ಭಂಗುರವಾದ ನನ್ನಾಶೆಯನು ಇಲ್ಲವಾಗಿಸು, ನಶ್ವರದ ಈ ಬಾಳಿನ ಮೋಹವನು ತ್ಯಜಿಸಲು ನನಗೆ ದಿವ್ಯ ಶಕ್ತಿಯನ್ನೀಡು

ನಿನ್ನದೊಂದು ಸುವರ್ಣ ಜ್ವಾಲೆ ನನ್ನ ದೇಹದಲಿರುವ ಷಡ್ವೈರಿಗಳನು ಭಸ್ಮಗೈದು ನನ್ನಾತ್ಮನ ಹಿರಿಮೆಯನು ಹೆಚ್ಚಿಸಲಿ!

ಮರ್ತ್ಯದ ಚೌಕಟ್ಟಿನಿಂದ ನನ್ನೀ ಜೀವವನು ಅ-ಮರ್ತ್ಯದ ಚೌಕಟ್ಟಿನಲಿ ಸರಿಗೊಳಿಸುವ ಪರಿಯ ತಿಳುಹಿ ಕಾಪಾಡು!

ಎದೆಯ ಪಾತ್ರೆಯನೆಲ್ಲ ಸ್ಫಟಿಕದಂತೆ ನಿರ್ಮಲಗೊಳಿಸು, ಅದರಲಿ ಅಮರ ಲೋಕದ ಅಮೃತವ ತುಂಬಿ ಬರಿಸು!

ಎಡೆಬಿಡದೆ ಬರುತಿರುವ ಈ ವಿಘ್ನ, ಈ ಸಂಕಟ ಈ ಮೋಹ-ಜಾಲ ಎಲ್ಲವನೂ ಮೀರಿ ಈ ಜೀವ ನಿಲ್ಲುವಂತೆ ಕರುಣಿಸು!

ಎನ್ನ ಸುತ್ತಲೂ ನೀ ಸುತ್ತಿಕೊಂಡಿದ್ದರೂ ಈ ಜೀವ ನಿನ್ನ ವಿರಹದ ಬೆಂಕಿಯುಲ್ಲದುರಿಯಲಿ ಬೇಯುತಿದೆ!

ನನ್ನೀ ಸಾಧನೆಯುಲಿ ಮುಕ್ತಿಯು ಶಾಂತಿ ಪ್ರೇಮೋರ್ಮಿ ಬರುವಂತೆ ಎನ್ನೊಡೆಯ ನೀನು ಕಾರುಣ್ಯ ದೃಷ್ಟಿಯಿಂ ನೋಡು.



# ನೀನೇ ಬೇಕು

ಪ್ರೀತಿ ಪ್ರೇಮದ ನಿಧಿಯು
ಸ್ನೇಹ ವಾತ್ಸಲ್ಯದ ತವರೆ
ಎನ್ನ ಸುಕೃತದ ಸಿರಿಯೆ
ನೀನು ನಿತ್ಯವಾಗು! ಚಿರವಾಗು!

ನಂಬಿಹೆ, ನಚ್ಚಿಹೆ
ನಿನ್ನ ಬರುವನೇ ನಿರೀಕ್ಷಿಸಿಹೆ
ಓ! ಸುಲಲಿತೆ ಸಂಪನ್ನೆ
ಪ್ರೇಮಾಂಭೋರಾಶಿ ನೀ ಎನ್ನವಳಾಗು!

ಚೈತ್ರಾಕ್ಷಿ...

# ಗವೀಶನಡಿ ತಾ ಕೈಲಾಸವದು ...

ಕೇಳಿಯ ! ನಿನಗಿಂದು ಎನ್ನ ಗುರುವಿನ
ತಾಣದ ಮಹಿಮೆಯಂ ಪೇಳುವೆ ಬಾ
ಇತ್ತನನ್ನೆಡೆಗೆ ಇಡು ನಿನ್ನ ಧ್ಯಾನವಂ
ಎಲ್ಲವಂ ಕೇಳ್ ಸಾರ್ಥಕವು ನಿನ್ನ ಜನುಮ
ಬರಿಕೇಳಿಮೊಡೆ ಪಾವನವಾಗಿಪುದು ನಿನ್ನಾತ್ಮ
ಇಂತಿರ್ಪ ಗವೀಶ ನಿಲಯದ ಮಹಿಮೆ ಪೇಳುವೆ ನಾಂ

ದಕ್ಷಿಣದೀನಾಡು ಕಾಶಿಯಂದದಿ
ಪವಿತ್ರವಾಗಿಪುದು ಈ ಕೊಪಣನಗರವು
ಬನದ ಪುಣ್ಣಿಮೆಯದಾಂಟೆ ತದಿಗಿಯು
ಪುಣ್ಯದಿನದಿ ಪವಾಡ ಪುರುಷನ ಪೊನ್ನಕಳಸದ ರಥವು ತಾ
ಜಗದ ಜನಕೆ ಪ್ರೇಸಚೇತನವನ್ನೀಯುತಲಿ
ರಥವು ತಾ ಸಾಗುತಿಪುದು ಪರಂಪರೆಯಿಂದದಿ

ಪುಣ್ಯಪುತವು ಬೆಟ್ಟದಾಡಿಯಲಿ
ಗವಿಮಂದಿರದಲಿ ತಾ ಮೌನವಾಗಿ ಪವಡಿಸಿಪ್ಪನು
ಮಠದ ಸುತ್ತಲೂ ನಾಟ್ಟಿಗೆಯಲೂ ಗುಪ್ಪದಾ
ಕೋಟೆ ತಾ ಭದ್ರವಾಗಿ ಕಾಯುತಿರ್ಪುದು
ಮಠದ ವಟಂಬದಿ ಪವಿತ್ರ ಗವೀಶ ಜೆಡೆ
ಕಾಲ ಕಾಲಕೂ ನಿರಂತರ [illegible] [illegible] [illegible]

ವಿದ್ಯಾಲಯವಾಗಿ ಶಿಷ್ಯವೃಂದದ
ಬೀಡಾಗಿ, ಜ್ಯೋತಿಷ್ಯ ಶಾಸ್ತ್ರಂಗಳ ಆಗರವಾಗಿ
ವಿದ್ಯಾರ್ಥಿಗಳ ತವರ್ಮನೆಯಾಗಿ
ಮೇಣ್ ಭಕ್ತವೃಂದಕೆ ಪ್ರಸಾದ ನಿಲಯವಾಗಿ
ಪ್ರತಿ ದಿನವು ಸಾವಿರಾರು ಜನಕೆ ತಾ
ಪ್ರಸಾದವನಿತ್ತು ಪುಣ್ಯಜೀವಿಗಳನಾಗಿ ಮಾಡುತಿಹುದು

ದರ್ಶನಾರ್ಥಿಗಳು ಕೆರೆಯಲಿ ಮಿಂದು
ನೂರಾರು ಮೆಟ್ಟಲವನೇರಿ ಪೋಗೆ ಕಾಣ್ಬುದು
ಗವೀಶನಡಿಗೊಯ್ಯುವ ಪುಣ್ಯದಾ ಪಿರಿದ್ವಾರಮು
ಅಲ್ಲಿಂದ ಎಂಟ್ಹೆಜ್ಜೆ ಪೋಗೆ ಸತ್ಯವಾಗಿರ್ಪ ಗುಡಿ ತಾ
ಕಂಗಳಿಗೆ ಅಂದವಾಗಿ ಹೃದಯಕೆ ಪವಿತ್ರವಾಗಿ
ಗೋಚರಿಪುದು ಪವಾಡ ಸ್ವಾಮಿಯ ಮಂದಿರವು ತಾ

ಇನ್ನು ಮುಂದೆ ಪೋಗೆ ಕಿರಿಬಾಗಿಲವೊಂದು ಸ್ವಾಗತಿಸುವ
ಕೆಳೆಯ ತಲೆವಾಗಿ ಭಕ್ತಿಯಲಿ ಒಳಪೊಕ್ಕೊಡೆ ಗರ್ಭ
ಗುಡಿಯಲಿ ನೆಲಿಸಿರುವ ಪುಣ್ಯಮೂರ್ತಿಯು ತಾ
ಕಂಗೊಳಿಸುವನು ಜ್ಯೋತಿರ್ಮಯ ತಾನಾಗಿ
ಪ್ರತಿ ದಿನವೂ ತ್ರಿಕಾಲ ಪೂಜೆ ಅತಿ ವೈಭವದಿ
ಅನಾದಿ ಕಾಲದಿಂ ನಿಯಮದಿ ನಡೆದು ಬರುತಿರ್ಪುದು

ಮತ್ತೆ ಪೊರಮೊಟ್ಟು, ಮಂದಿರದ ಹಿಂಬದಿ ಪೋಗೆ
ಕಿರಿ ಪಿರಿದ್ವಾರ ಕಾಣ್ಬುದು ಸುಹೃದಯ
ಹುಂ ! ಮುಂದೆ ನಡೆ ಜಗದ್ವಂದ್ಯ ಮಂಗಲವಹು

ಮೂರ್ತಿ ತಾ ಮಂಡಿಸಿರುವದು ಪದ್ಮಾಸನದಿ
ಸಚ್ಚಿದಾನಂದ ಚಿನ್ಮಯ ಮೂರ್ತಿ
ಮರಿಶಾಂತವೀರ ಮಹಾಸ್ವಾಮಿ ತಾನೇ ಪರಂಜ್ಯೋತಿಯಾಗಿ

ವೀಣಾಪಾಣಿಯೇ ಮೈವೆತ್ತಿ ಬಂದಿಹಳು
ಆ ಮಂಗಲಮಯ ಸಿದ್ಧಗುರುವಿನ ಮೂರ್ತಿಯಲಿ
ಸದಾ ಶಾಂತಮುಖವಾದರೂ ಗಂಭೀರ ಮುಖಮುದ್ರೆ
ಯಾರು ಪೋದರೂ ಅದೇ ಆದರ ಅವೇ ಮಂಗಲವಾತು
ನಗುಮೊಗದಿ "ಬನ್ನಿ ಸೌಖ್ಯವೆ" ಎಂದುಸುರಿ
ಅವರವರ ಯೋಗಕ್ಷೇಮವ ಬಯಸಿ ಮಂಗಲವ ನೀಡುವರು

ಅಗಾಧವಾದ ದೀರ್ಘಜ್ಞಾನೋಪಾಸದಿ
ಬಡಕಲಮಾಗಿಹುದು ದೇಹ, ಆದೊಡೇಂ ಅದೆಂಥ
ಧೀಶಕ್ತಿ ತುಂಬಿಹುದು ಬಡದೇಹದಲಿರುವ ಆತ್ಮದಿ
ಚಿರಂತರವೂ ಸತ್ಯ-ನಿತ್ಯ-ಮೂರ್ತಿಗಳೇ ಬೀಗಲ್ಲವೇಂ
ಅಮಂದಲೀನಾದು, ಅಮಂದಲೀಬಾಳು
ಎಲ್ಲಿವೂ ಸೊಗವು, ಎಲ್ಲಿವೂ ಚೆನ್ನು, ಎಲ್ಲಿವೂ ಪೊನ್ನಲ್ಲವೇಂ

ಏನು? ಕೆಳೆಯ ಕಣ್ಮುಂದೆ ಬಂದು
ನಿಂತಿತೆ, ಆ ಮಂಗಲಮೂರ್ತಿ ಇಷ್ಟದಲಿ ತಾ
ಪ್ರಶಾಂತಾತ್ಮ ನೀನೆಂದಿಗೆ; ಅಂತೆಯೇ
ಪಡೆದೆ ನೀಂ ಸ್ವಾಮಿಯ ದರ್ಶನ ಸಾನ್ನಿಧ್ಯವನ
ಆತನಂ ಕಂಡ ನಿನ್ನ ಲೋಚನಂಗಳು
ಪವಿತ್ರವಾದವು ಅವೆಂದಿಗೂ ನೋಡದ



. . . ಬೃಹ್ಮಿ

ಇಂತಿರ್ಪುದು ಈ ಸಿದ್ಧಯೋಗಿಯ
ನೆಲೆವೀಡು; ಆತನ ಕಥೆ, ಚರಿತೆ
ಪಿರಿದಾದು; ನನಗಳವಲ್ಲ ಎಲ್ಲಿವಂ
ಪೇಳೆ; ಅದು ಅನಂತ ! ಅನಾದಿ !!
ಅದ್ಭುತ ! ಅಮೋಘ !! ಕೆಳೆಯ
ಮತ್ತೆ ಅವನ ಕೃಪೆಯಿರೆ ಹಾಡಿ ತಣಿವೆ ಅವನ ಹಿರಿಮೆಯಂ

ಈತನಿಂ ಪಾವನವಾದ ನಾಡಿನಲಿ
ಪುಟ್ಟಿದ ಅವನ ಕಿಂಕರ
ತಾ ಪುಣ್ಯ ಜೀವಿಯಲ್ತೆ ಮತ್ತೇಂ
ಅವನಿಗಿದು ಹೆಮ್ಮೆ, ಅವನದಿದು ಪುಣ್ಯ
ಅವನ ಹಾಡೆಲ್ಲವೂ ಅವನ ಕೃಪೆ !
ಅವನ ನುಡಿಯೆಲ್ಲವೂ ಅವನ ಪ್ರಸಾದ !!

ಹೀಗಿರ್ಪ ಪವಿತ್ರ ತಾಣಮಂ ಮರೆತು
ಮೇಣೊಂದು ಲೋಕವಿದೆಯೆಂದು ಭ್ರಮಿಸಿ
ಕಲ್ಪನೆಯ ಸಗ್ಗ ಸೊಗಮಂ ಬಯಸಿದೊಡೆ
ಅದು ತಾ ಪಾಪ ಮಲ್ತೆ ಮತ್ತೇಂ ಪೇಳ್ ಕೆಳೆಯ
ಪವಿತ್ರ ಮಂಗಲಮಯ "ಗವೀಶನಡಿ ತಾ
ಕೈಲಾಸಮದು" ಇರಲ್ಕೆ ಆ ಸಗ್ಗಕೇಂ ಕೊಡುಂಟೆ ಪೋ.

# ಶಿವ ಶಿವೆ . . .

ನಿನ್ನ ಮುಖ ಮಂಡಲ ಪರಿಶುದ್ಧ ಅರುಣೋದಯದಂತೆ
ಕಾಂತಿಯುತವಾಗಿ ಶೋಭಿಸುತಿದೆ ಪ್ರಿಯೆ!

ಮಂಜು ಮಂಜಾದ ನನ್ನೀ ನಶ್ವರದ ಕಣ್ಣುಗಳನು ತೇಜೋಮಯ-
ವನ್ನಾಗಿ ಮಾಡುತಿದೆ ಆ ಬೆಳಕು ಸಖಿ!

ಮುಹಾ ಬೆಳಗಿನ ಬೆಳಕನು ನಿಮಿಷ ನಿಮಿಷಕೂ ಹೆಚ್ಚಿಸುತಿದೆ
ನಿನ್ನಾ ತೇಜಸ್ವಿ ಮುಖದಲಿರುವ ನೇತ್ರ ದ್ವಯ!

ನಿನ್ನಾ ಸ್ವರ್ಗೀಯ ವೀಣಾನಾದ ಮೇಲೆಳೆಯುತಿದೆ ಎನ್ನ
ನಿನ್ನ ಸಂಗ ಸುಖದಲಿರಿಸಲೆಂದು!

ಹುಚ್ಚು ಪ್ರೇಮ ನಿನ್ನುಸಿರ ಅನ್ವೇಷಣೆಯಲಿ ಮತ್ತೆ
ಮತ್ತೆ ಹುಚ್ಚೇರಿಸಿಕೊಳ್ಳುತಿದೆ!

ಬೆಳಗಿನ ಮಂದ ಸಮೀರಣ ಸವಿಸುಳಿಯುತಿದೆ
ಎನ್ನೆದೆಯಲಿ ನಿನ್ನ ದರುಶನದಿ!

ಕನಸಿನ ಸಂತಸವು, ನನಸಿನ ಪಾತ್ರೆಯಲಿ ಜೀವಕೆ
ತುಂಬುತಿದೆ, ನೀ ಎನ್ನವಳಾಗುವೆ ಎಂಬಾಸೆಯಲಿ!

ನಿನ್ನ ಸ್ಪರ್ಶದ ಬಲದಿಂದ ಈ ಹಣ್ಣು ಮುಪ್ಪಿನಲಿ ಚೈತನ್ಯ
ತುಂಬಿ ಬಂದೀತೆಂದಾಶಿಸಿದೆ ಈ ಜೀವ!



. . . ಪ್ರಕೃತಿ

ನಿನ್ನ ಅಧರ ಸ್ಪರ್ಶದಿ ಸಂತಸದ ಹೊನಲು ಹೃದಯಕೊಳದಂಚಿ-
ನವರೆಗೂ ತುಂಬಿ ತುಳುಕೀತೆಂದು ಭಾವಿಸಿದೆ ಈ ಜೀವ!

ನಿನ್ನ ಸೌಂದರ್ಯವನು, ನಿನ್ನಧರಾಮೃತವನು ನನ್ನರಿವು ಆಳವಾಗಿ
ಸವಿದಾಗ, ಪರಿಪೂರ್ಣತ್ವ ಬರಬಹುದು ನನ್ನಲ್ಲಿ!

ಮಾನವತ್ವದ ಕನಸಿನ ಮೇರೆ ಮೀರಿ ನಿಲ್ಲಬಹುದು
ಎದೆಯಾಳದಲ್ಲಾಗ ನನ್ನ ಜೀವನದ ಹಿರಿಯ ಸವಿಗನಸು!

ನನ್ನೊಲುಮೆಯ ಗೆಳತಿ, ಅಮೃತಮಯ ವಾತಾವರಣದಲಿ
ನಮ್ಮಾತ್ಮಗಳ ಸಂಪ್ರೀತಿಯ ಆಲಿಂಗನವಾದೊಡೆ;

ನಮ್ಮಾಲಿಂಗನದಲಿ ಶಿವ ಶಿವೆಯರ ಪರಮ
ಪಾವನ ದಿವ್ಯ ಮಂಗಳ ಶಕ್ತಿ ಸಮ್ಮಿಲಿತವಾದೊಡೆ;

ಆಗ ನಾ .... ಶಿವ .... ನೀ .... ಶಿವೆ .... !

# ಪ್ರಕೃತಿ ಪುರುಷ

ಮಧುಮಾಸ ಬಂದಿತ್ತು
ಹೂ ಅರಳಿ ನಿಂತಿತ್ತು
ಪರಾಗ ತುಂಬಿ ಸೂಸಿತ್ತು
ಭ್ರಮರ ಗುಂಯ್ ಗುಟ್ಟಿತ್ತು

ಹರೆಯು ಎದೆಯಲಿ ತುಳುಕಿತ್ತು
ಅಂತೆ ಎದೆ ತುಂಬಿ ನಿಂತಿತ್ತು
ಪಕಳೆಗಳಲಿ ನಗೆ ತುಳುಕಿ ಚೆಲ್ಲಿತ್ತು
ಬಾಯೆಂದು ಕರೆಯ ನೀಡಿತ್ತು

ತುಂಬಿ ಬಂದಾಗ ಹರ್ಷ ಉಕ್ಕಿತ್ತು
ನಸುಗೆಂಪು ಗಲ್ಲಗಳಲಿ ಮಿರುಗಿತ್ತು
ಸಂತಸದ ಹೊನಲು ಹರಿದಿತ್ತು
ಆಗ ಆರಡಿ ಮುದ್ದಿಟ್ಟು ಹುಚ್ಚಾಗಿ ಹಾಡಿತ್ತು

ಕವಿ ಕಂಡ ಈ ದೃಶ್ಯ ರಮ್ಯವಾಗಿತ್ತು!
ಕವಿ ತಿಳಿದ ಈ ರಹಸ್ಯ ಗೂಢವಾಗಿತ್ತು!!



. . . [illegible]

# ಪ್ರಭಾತ ದರ್ಶನ

ನೀನು ಮೌನ ತಾಳಿದೊಡೆ
ನಿನ್ನ ಮಹಾ ಮೌನವನೇ
ನನ್ನ ಹೃದಯ ತುಂಬ ತುಂಬಿಕೊಳುವೆ !

ನಾನು ಶಾಂತಳಾಗಿ, ಸಹನಶೀಲೆಯಾಗಿ
ನಕ್ಷತ್ರಗಳ ನೀಲಾಂಜನದಿಂ ತಲೆವಾಗಿರುವ
ರಜನಿಯೋಲ್ ಬರುವ ಬೆಳಗಿನ ಪ್ರತೀಕ್ಷೆ ಗೈವೆ !

ಬೆಳಗಿನ ಮಹಾ ದರ್ಶನದೊಂದಿಗೆ
ಈ ಕತ್ತಲು ಕಳೆದು ಹೋಗಿ, ಆಕಾಶದಲಿ ಪ್ರಕಾಶದ
ಸ್ವರ್ಣ-ಸಮುದ್ರದ ಹಾಗೆ, ನಿನ್ನಮಧುರ ಧ್ವನಿ ತುಂಬುತಿದೆ!

ಆಗ....ನಿನ್ನ ವಾಣಿ, ಪಕ್ಷಿಗಳ ಕಲಕಲ ಕೂಜನದಲಿ
ವನ-ನಿಕುಂಜಗಳಲಿ, ತುಟಿ ಅರಳಿಸುವ ಹೂಗಳಲಿ
ನಿನ್ನಸುಸ್ವರ ಪ್ರಸ್ಫುಟಿತಗೊಳುವದನು ನೋಡುವೆ !

[ಮೂಲ : ಕವಿ ರವೀಂದ್ರರು]




# ಪ್ರೀತಿ

ಈ ನೆಲದ ಹೂದೋಟದ ಕೋಟ್ಯಾವಧಿ ಲತಾಮಂಟಪ ಗಳಲಿ, ನೂರು ನೂರು ಜಾತಿಯ ಹಕ್ಕಿ-ವಕ್ಕಿಗಳು ಚಂಚಲಮಯ ಪುಷ್ಪರಾಶಿಯಿಂದೊಡಗೂಡಿ-ಗೀತ ಪಾಡುತಲಿವೆ !....

ಅವೇ ಅರಳಿ ಪುಳಕಿತಗೊಂಡಿರುವ- ಚೆಂಗುಲಾಬಿಯ – ಮಿದು-ಎದೆಯ ಮೇಲೆ ಕುಳಿತ ನವ ವಸಂತ ಮಾಸದ ಭ್ರಮರ ಮನದುಂಬಿ ಪಾಡುತಲಿದೆ-ನೃತ್ಯಗೈಯುತಲಿದೆ !....

ಬೆಳಗಿನ ನವಿರಾದ ಗಾಳಿಗೆ ಅದೇ ತುಂಬು ರೀತಿಯಲಿ ವಿಕಸಿತಗೊಂಡಿರುವ ಪುಷ್ಪದೆದೆಯನಪ್ಪಿ, ಅವರಲ್ಲಿಯ ಮಕರಂದ ಆಸ್ವಾದಿಸುತಿದೆ-ಮತ್ತೊಂದು ತುಂಬಿ !....

ತುಂಬಿ, ಅದೇ ಅರಳಿರುವ ಹೂವ-ಪ್ರೀತಿ ಪ್ರೇಮ-ಮಕರಂದ - ಪರಾಗ - ಆ ಹೂಜೇನು ಕುಡಿದು, ಝೇಂಕರಿಸುತಿದೆ ! ಹೂವಿನೊಂದಿಗೆ ಸುಸಿಲಾಟವಾಡುತಿದೆ !....

ಪ್ರಾತಃಕಾಲದ ಚೇತನಾಮಯ ಸಮಯದಲಿ, ಸಂಧ್ಯಾ ಸಮಯದ ರಮಣೀಯ ದೃಶ್ಯಮಯ ಕಾವ್ಯಯುಕ್ತ ಕಾಲದಲಿ, ಕುಕಿಲ್ವ ಕೋಗಿಲೆ, ಕಾಜಾಣಗಳು ಪ್ರೀತಿಸು – ಎಂದೇ ಹೇಳುತಿವೆ, ಪ್ರೀತಿಯನು ಕುರಿತೇ ಹಾಡುತಿವೆ !

ಪ್ರೀತಿ, ಪ್ರೇಮದ ಮಹತಿಯನರಿತವರ ಪಾಲಿಗೆ ಪ್ರಿತಿಯೇ ದೇವರು ! ಪ್ರೇಮವೇ ದೇವರು ! ಇಲ್ಲಿವೆ ದೇವರೇ ಪ್ರೀತಿ ದೇವರೇ ಪ್ರೇಮ !!....



. . . ಚೈತ್ರಾಕ್ಷಿ

ಪ್ರೀತಿಯನು ದೇವರೆಂದು ಪೂಜಿಸುವವರಿಗೆ – ಪ್ರೀತಿ-ಪ್ರೇಮ-ಪ್ರೀತಿಸುವಿಕೆ-ಸ್ವರ್ಗೀಯ ಆನಂದದಷ್ಟು ಪವಿತ್ರವಾಗಿದೆ! ಆನಂದದಾಯಕವಾಗಿದೆ!....

ಪ್ರೀತಿ-ಎದೆಯೊಳಗಿನ ಮುಗುಳು ! ಪ್ರೀತಿ ಮನದಾಚೆಯ ಬದುಕು! ಅದು ನಿರಾಕಾರ! ಶಬ್ದಕೆ ಸಿಲುಕದು! ಅಂತೇ ಅದು ಶಬ್ದದಾಚೆನ ಮಾತು !....

ಪ್ರೀತಿ-ಪ್ರೀತಿಸಿದಷ್ಟೂ ಹೆಚ್ಚಾಗುತ್ತದೆ! ಅದಕ್ಕೆ ಕೊರತೆ ಎಂಬುದೇ ಇಲ್ಲ! ಅದು ಯಾವಾಗಲೂ ತುಂಬಿರುತ್ತದೆ! ಅಂತೇ ತುಂಬಿದುದು ತುಳುಕದು ನೋಡಾ !....

ಪ್ರೀತಿ-ಮಧುರ ಅನುಭವ! ಇದನ್ನು ಅನುಭವಿಸಿದವನು ಪಾವನ ಚರಿತನಾಗುತ್ತಾನೆ! ಪ್ರೀತಿಯನು ಪ್ರೀತಿಸಿದವನ ಅನುಭವ ಹೇಳಲಾಗದು! ಬರೆಯಲಾಗದು! ಅದು ಕೂಸು ಕಂಡ ಕನಸು ಕಾಣಾ !....

ಪ್ರೀತಿ-ಮಧುರ ಯಾತನೆ! ಇಂಥ ಮಧುರ ಯಾತನೆಗಳು ಎನಿತಿದ್ದರೂ ಸರಿ, ಅನುಭವಿಸುವದೇ ಪರಮ ಭಾಗ್ಯ !

## — ಗೆ

ಏಳು .... ಎದ್ದೇಳು .... ಪ್ರತಿಭೆ
ಎನ್ನ ಕಾವ್ಯದ ಅಪ್ರತಿಮ ರಸಕನ್ಯೆ
ಇಂದಿಲ್ಲದಷ್ಟು ಇನ್ನೆಂದೂ ಇಲ್ಲವೇಳು

*

ನಿತ್ಯ ನೂತನವಾಗಿರುವ ಪ್ರೇಮದೊಲ್ಮೆಯ
ನಲಿನಿ, ನನ್ನ ಕಾವ್ಯಲೋಕದ ಜಸದ ಪೆಂಪೆ
ಏಳು ಎದ್ದೇಳು ರಸವಂತಿ ಮಧುರ ಕನ್ಯೆ

*

ಏಳು .... ಮನದನ್ನೆ .... ಏಳು
ಏಳು ನಲ್ಲೆ ಏಳು ಶುಭಚಿನ್ಹ
ಬಾಳ ನಭದಲಿ ಮೂಡಿ ಬಂದಿಹುದೇಳು

*

ಬಾ ಸನಿಹಕೆ.... ಉಹುಂ.... ಉಹುಂ....
ಬೇಗೆ ಬಾ ನನ್ನೆಡೆಗೆ ಕೆಳದಿ
ಇನ್ನು ಸನಿಹ....ಮುಖ ಹೀಗೆ....ಇತ್ತ

*

ಹಾಂ ! ಹಾಗೆ ಬಲು ಜಾಣೆ ನೀನು
ನಿನ್ನ ತುಟಿ ಹಾಲ್ಜೇನು ಸವಿ
ನಿನ್ನ ಹೂ-ಮುಖವೆಲ್ಲ ರಸರುಚಿ ನೋಡು

*

ಅರುಣೋದಯವಾಗುತಿದೆ ನೋಡಿತ್ತ
ಇದೆ ಈಗ ಮಳೆ ನಿಂತು ಬಾನೆಲ್ಲ
ಬೆಳ್ಳಗಾಗಿದೆ ನೋಡು ಗೆಳತಿ

*

ಮೂರು ದಿನದಿ ವರ್ಷ ಏಕ ತಾರದಿ
ಸುರಿ ಸುರಿದು ನೆಲವ ತಣಿಸಿದೆ
ನಾಡೆಲ್ಲ ಸೊಗಸಿನಲಿ ತುಂಬಿ ತುಳುಕಿದೆ ನೋಡು

*

ಅದೊ ನೆಲವು ಚೇತರಿಸಿ ಬರಡು 'ಬಯಲಲಿ' ಚಿಗುರಿ
ನಿಂತಿಹುದು ನೋಡಿಲ್ಲಿ !
ಹಕ್ಕಿಗಳ ಇಂಚರದಿ ನಾದ ವೈಮುರಿಯುತಿದೆ
ಆದರೂ ನಿನ್ನಿರವು ಕಾಣದಿಲ್ಲಿ !

*

ಕಂಗಳೋ ಹಸಿದಿಹವು ಮನವು 'ರಣರಣವೆನಲು'
ಎಂದು ನಿನ್ನಯ ಬರುವು ಎನ್ನ ಮುಗ್ಧ !
ಬದುಕಿನಲಿ ತುಂಬುವೆಯು ನಿನ್ನ ದರುಶನ ಸುಧೆಯು
ಚೆಲುವಿನಾಸೆಯನಿಟ್ಟು ಕರೆವೆ ಸ್ನಿಗ್ಧ !

# ಹೊಸ ಬಾಳಿಗಾಹ್ವಾನ

ನೂರು ಧರ್ಮ, ನೂರು ಜಾತಿ
ನೂರು ಪಂಥ, ನೂರು ತರ್ಕ
ಈ ವಿತರ್ಕಗಳೆಲ್ಲ ನಿಲ್ಲಲಿ
ಪ್ರೇಮವೊಂದೆ ವಿಶ್ವಧರ್ಮ
ಸಮತೆಯೊಂದೆ ಎಲ್ಲ ನಿಯಮ
ಒಡನೆ ಮೂಡಿ ಬೆಳಗಲಿ
ಸತ್ಯ ಪಥವು, ಸದ್ವಿವೇಕ
ಸದಾಚಾರ ಸಾಮಗಾನ
ಸದಾ ಸತ್ಯ ನೆಲಿಸಲಿ ॥
ಪುಷ್ಪದಲ್ಲಿ ಪುಟ್ಟತುಂಬಿ
ಗೇಯ ಗೈದು ಸುಖಿಸುವಂತೆ
ನಮ್ಮ ಜನತೆ ಸುಖಿಸಲಿ
ಈ ನಿರಾಶೆ ದುಃಖ ದುಗುಡ
ದುರ್ವಿಲಾಸಗಳನು, ಬರುವ
ಹೊಸತು ಬಾಳು ಮೆಟ್ಟಲಿ
ಅಂದು ನಿಖಿಲ ಜೀವ ಕೋಟಿ
ಸರ್ವ ಜಗದ ನಿರುತ ಶಾಂತಿ
ಪ್ರೇಮವೊಂದೆ ಧರ್ಮಕಾಂತಿ

# ಕಂಠಾಭರಣ !

ಜನರು ನಮಗೆ ಕಲಂಕಿಯೆಂದೆನ್ನುತ್ತಾರೆ
ಅನ್ನಲಿ ಬಿಡು, ನಮಗೆ ದುಃಖವೇಕೆ ?
ನಿನ್ನ ಕಾರಣದಿಂದಾಗಿ ನನಗೆ ಬಂದಿರುವ ಈ ಕಲಂಕ
ನನ್ನ ಪಾಲಿಗೆ ಅದುವೆ ಕಂಠಾಭರಣ ದೇವಿ !

[ ಮೂಲ : ಕವಿ ಚಂಡಿದಾಸ

# ಯಾರು ? . . .

ಗಾಳಿ ಸೋಂಕದ ಹೂ, ಅಳಿಮೂಸದ ಪುಷ್ಪ ಶುದ್ಧ ಹೃದಯದಿಂ
ಮೆಲ್ಲನಡಿಯಲಿ ಬಂದು ಮತ್ತೆ ದೂರ ಹೋದುದೇಕೊ !
ಮಧುರ ಭಕ್ತಿಯಿಂ ಭಾವದೀಪ್ತಿಯಿಂ ಜೀವ ಜೀವಕು
ಸಾಗಿ ಬರುವೆನೆಂದು ಹೇಳಿ ತೆರಳಿದುದೇಕೊ !
ಚಿತ್ತ ಭಿತ್ತಿಯಲಿ ಮೂಡಿ ನಿಂದು – ಎಂದೂ
ಇರುವೆನೆಂದು ನುಡಿನುಡಿದು ಹೋದುದೇಕೊ !

ಅಲುಗಿ ಹೋಯಿತು ಸೆರಗು ಬರಿಯ ತೆರೆಯಂತೆಯೇ
ಪ್ರೇಮದಿಂಚರ ನುಡಿಸು ಮಾಧುರ್ಯವನಿತ್ತು ನಡೆದರಾರೊ !
ಏನೆಂಥ ಸೊಗವು, ಅದೆಂಥ ಮೋದವೋ ಜೀವನದಲ್ಲಿ
ಕೋಲ್ಮಿಂಚಿನೋಲಿದೆಯ ತಟ್ಟಿ ಮರಳಿದರಾರೊ !
ಒತ್ತರದಿ ಪರಿದಾಡೆ ನರನರದಿ ನೆತ್ತರವು
ಪ್ರೇಮದಂಚಿನ ಸೊಬಗ ತುಂಬಿ ತೆರಳಿದರಾರೊ !
ಪುಷ್ಪಗಳ ಪರಿಯಲ್ಲಿ ಭಾವನೆಗಳರಳಿದವು
ತರತರದ ಬಣ್ಣಮಂ ಚೆಲ್ಲಿ ಹೋದವರು ಯಾರೊ !





. . . ಜೈ ಶಾಂತಿ

# ಹೃದಯ ಮಂದಿರದಲಿ

ನನ್ನ ಹೃದಯ ಮಂದಿರದಲಿ ಪ್ರಥಮವಾಗಿ
ನೀನು ನೀಲಾಂಜನವ ಹಿಡಿದುಕೊಂಡು ಬಂದೆ
ನೀನು ತಂದ ಬೆಳಕಿನೊಂದಿಗೆ
ನಿನ್ನನೇ ಹಿಂಬಾಲಿಸಿ ಬಂದವು ಮೂರು ಲೋಕಗಳು.

[ ಮೂಲ : ಕವಿ ಚಂಡಿದಾಸ ]

# ಬಾಳ ದೇಗುಲದಲಿ!

ಬಾಳಿನಲಿ ಅನುರಾಗದಿಂ
  ಬಾಂಧವ್ಯ ಬೆಳಸೆ ಪ್ರೇಮದಿಂ
ಒಲುಮೆ ಒಲಿಸೆ ಬಾಳಿನಲ್ಲೆಲ್ಲ
  ಹೊಸ ಕಳೆಯು ತುಂಬಿ ಬರಬಹುದು !

ಬಾಳ ದೇಗುಲದಲಿ
  ಪ್ರೇಮ ದೀಪ್ತಿಯ ಬೆಳಗೆ
ಸತ್-ಚಿತ್-ಆನಂದ ಒಲಿದು ಬರೆ
  ಬಾಳಿನಲಿ ಹೊಸ ಬೆಳಕು ತೂರಿ ಬರಬಹುದು !

• • ಚೈತ್ಯಾಕ್ತಿ

# ನನ್ನ ಕಣ್ಣಿನ ಬೆಳಕು !

ರಾಮಿ ! ನೀನು ನನ್ನ ರಮಣಿ
ನೀನು ನನ್ನ ತಾಯಿ ನನ್ನ ತಂದೆ
ನನ್ನ ಸಂಧ್ಯಾಪೂಜನ ನೀನೇ ನನ್ನ ಭಜನ
ನೀನು ನನ್ನ ಗಾಯತ್ರಿ ವೇದಮಾತೆ !

ನೀನು ವಾಗ್ವಾದಿನಿ ದುರ್ಗತಿ ನಾಶಿನಿ
ನೀನು ನನ್ನ ಕಂಠಾಭರಣ !
ನೀನು ಮುಕ್ತಿ ನೀನು ಶಕ್ತಿ
ನೀನು ನನ್ನ ಕಣ್ಣಿನ ಬೆಳಕು !

[ ಮೂಲ : ಕವಿ ಚಂಡಿದಾಸ ]

# ಮಹಾದೇವಿ! ...

ಓ ! ತಾಯೆ !
ನನ್ನ ಸಮಸ್ತ ಜೀವನವೂ ನಿನ್ನ
ವಾಸ್ತವಿಕತೆಯಿಂ ಬಂಧಿತ-
ವಾಗಿದೆ ಎಂಬುದಂ ನಾ ಬಲ್ಲೆ!

ಓ ! ಚಿದ್ಘನ ರೂಪಿಣಿ !
ನನ್ನ ಸುಖ ದುಃಖ ಎಲ್ಲದರಲಿಯು
ನಿನ್ನ ಶಕ್ತಿ ಹುದುಗಿದೆ ಎಂಬುದಂ
ನಾ ಎಂದಿನಿಂದಲೂ ಅರಿತಿಹೆ !

ಓ ! ದಿವ್ಯ ಬೆಳಕೆ !
ನನ್ನ ಎದೆಯಾಳದಲಿಹ ಬೆಳಕನು
ನಿನ್ನ ಚಿತ್ಕಳೆಯು ಬೆಳಕು ಸ್ಪರ್ಶಿಸೆ
ಸಚ್ಚಿದಾನಂದ ಬೆಳಕು ಮೂಡಬಹುದಲ್ಲಿ !

ಓ ! ಸರ್ವಶಕ್ತಿದಾಯಿನಿ !
ಸರ್ವಾರ್ಪಣ ಭಾವದಿಂ ನಿನಗೆಲ್ಲಮಂ
ಅರ್ಪಿಸಿಹ ನಾನು ನಿಶ್ಚಿಂತ
ನಿರ್ಭಯನಾಗಿಹೆನು ತಾಯೆ !

- ಚೈತ್ರಾಕ್ಷಿ

ಓ ! ತಾಯೆ ಶಾಂಭವಿ !
ನಿನ್ನ ಇರುವಿಕೆಯ ಸತ್ಯತೆಯಲಿ
ನನ್ನ ಇರುವನೇ ಕಂಡಿಹೆ
ನನ್ನಲಿ ನಿನ್ನ ದಿವ್ಯ ಮೂರ್ತಿಯ ದೃಷ್ಟಿಸಿಹೆ !

ಓ ! ತಾಯೆ ಭಗವತಿ !
ನಿನ್ನ ಆದಿ ಶಕ್ತಿಯೊಳಗಿನಿಂದಲೆ
ನನ್ನನು ಸೃಷ್ಟಿಸಿಹೆ ಎಂಬುದನರಿತಿಹೆ
ನಮ್ಮೀ ಸಂಬಂಧ, ಅನಾದಿ ಅಗಮ್ಯವೆಂಬುದನು ಬಲ್ಲೆ !

ಓ ! ತಾಯೆ ಕರುಣೆ !
ನಿನ್ನೆದೆಯ ಈ ಮುಗುಳ
ತಾಯ್ತನದ ತಣ್ಪಿನಲಿ
ಸಲುಹಿ ಕಾಪಾಡಿ ಕೃಪೆಗೈ !

# ನಿನ್ನ ಕೃಪೆಯೊಂದೆ ಸಾಕು !




ಸತ್ಯ ಸಾಕ್ಷಾತ್ಕಾರದ ತಂದೆ
ಒಳಿತೊಂದನೇ ಉಳಿಸಿ
ಅಶುಭವನೆಲ್ಲ ಅಳಿಸು

ಸೃಷ್ಟಿ ಶಿವಸ್ವರೂಪವೆನ್ನುವ ಪ್ರಭು
ಸ್ನೇಹ, ವಾತ್ಸಲ್ಯದ ಬೀಜವನೆ ಬಿತ್ತಿ
ದ್ವೇಷ ಅಸೂಯೆಗಳ ಕಳೆ ಇಲ್ಲವಾಗಿಸು

'ನಾನು' ಇಲ್ಲವಾಗಿ 'ನೀನೆ' ಆದ ಶುಭವೆ
ಜಗವೆಲ್ಲವೂ ಕಾರುಣ್ಯದ ತವರಾಗಲಿ
ಕಕ್ಕುಲಾತಿಯ ಬಳ್ಳಿ ಪುಟ್ಟಿ ಬರಲಿ.

ಸತ್-ಚಿತ್-ಆನಂದದ ಸ್ವಾಮಿ
ಸಂಧ್ಯಾಕಾಲದ ಮಂಗಲ ಸಮಯದಿ
ಪಾದವಿಡಿದು ಹರಸು ತಂದೆ ಎನಲು
"ಶಿವಯೋಗಿಯ ಕೃಪೆಯಿದೆ ಹೋಗು ಬಾಳು"
ಎನೆ, ಕಂಣಿನಂಚಿನಲಿ ನೀರ್ಹಿಂತಿದ್ದವು ಒಡೆಯ
"ನಸುಕಿನ ಮುಸುಕಿನಲಿ, ಹನಿಗೊಂಡ ಹೂಗಳು
ಸುಂದರ ಸ್ವಪ್ನ ಕಂಡು, ಕಂಣು ತೆರೆದಂತೆ"
ಕಂಣ್ಬಿಟ್ಟು, ಮತ್ತೆ ಮತ್ತೆ ಅದೇ ಮಂಗಳ
ತೇಜಃಪುಂಜ ಮುಖವನೇ ಕಂಡು, ಪಾವನ
ಗೊಂಡವು ದೇವ ಈ ಲೋಚನಂಗಳು.



• ಜೈ ಶಕ್ತಿ

ಹನಿ ಕಡಲು ಆದ ಹಾಗೆ
ಅಣು ಮಹತ್ತಾಗುವಂತೆ
ಕರುಣಿಸು ನನ್ನೊಡೆಯ

ಜಗವೆಲ್ಲವೂ ಶಿವನಾದ ಹಾಗೆ
ವ್ಯಕ್ತಿ ವಿಶ್ವವಾಗುವಂತೆ
ಹರಸು ಯೋಗೀಶ್ವರ !

ಸಕಲ ಜೀವಾತ್ಮರ ಲೇಸನೇ
ಬಯಸುವ ಮೃತ್ಯುಂಜಯ ಸ್ವಾಮಿ
ನಾ ನಿಮ್ಮ ಪಾದ ಪದ್ಮೋಪ ಜೀವಿ.